be taken by the Estate Officer or Officer authorized by the Estate Officer to evict the occupants from the quarters by utilizing the services of Security Staff/Police.

18. The Committee shall reserve certain quarters in each of the Campuses/Research Stations to be allotted to the Univesity employees who are listed as essential on the Campus/Research Stations. In such an event the allottee shall pay the normal rent whether actually in occupation of the house allotted to him or not. However, the Chairman of the HAC may exempt such employees from occupation on written request. He/She shall vacate the quarters within two months from the date of his relief of essential services.
19. Such of the employees of the University who have been allotted with University quarters shall shoulder additional assignments such as Wardenship or any other official work assigned by the University.
20. The House Allotment Committee may re-allot or exchange quarters on request within the type of quarters occupied by an allottee keeping in view the best interest of the University.
21. The House Allotment Committee shall have the power to cancel allotment made earlier after recording reasons under extra ordinary circumstances and in the best interest of the University.
22. In all matters of allotment of house in the University, the decision of the House Allotment Committee shall be final, with a provision for an appeal to the Vice Chancellor and therafter the Board.
23. Applications for allotment of quarters shall be in the prescibed form. The applicant on allotment, but before the occupation of quarters have to furnish an affidavit on a stamped paper of prescribed value to the effect that he will abide by the House Allotment Committee Regulations formulated by the University from time to time and in case of violation of any of the provisions of the House Allotment Regulations the University shall have the right to take suitable disciplinary action as deemed fit. Similar affidavit shall be taken from the present occupant.
24. (a) Any University employee who owned a house in their name or in the name of wife/husband or family members at the place of work, shall not be eligible for allotment of University quarters except in case of essential services listed.

    (b)Any University employees or his/her spouse or family members who have already become/who becomes owner of a house at the place of work after the allotment of University quarters shall vacate the quarters within 60 days from the date of becoming owner or the effective date of these regulations. Provided that in respect of employees or their spouses becoming owner of a house by availing loan from any sources for building house shall report to the Estate Officer or to the Head of the Office within 30 days of drawal of the 1st instalment of loan, and he shall vacate the quarters within 24 months from the date of drawal of the 1st instalment of loan or the actual date of completion of the house whichever is earlier.

    (c) Any University employees or his spouse or family members who has already become/who becomes a owner of a house at the place of work after the allotment of University quarters by availing house purchase advance from any source, shall report to the Estate Officer or to the Head of this Office within 30 days from the date of drawal of advance and shall vacate the quarters within the next 60 days.

    (d) Any University employee who had constructed a House or purchased the House by availing loan and subsequently sold the same/will sell the same will also be not eligible for the allotment of UAS quarters.

Further, any University employee who had constructed/purchased a house by availing loans and sold later and who is in occupancy of UAS quarters at present shall vacate the quarters within two months as in the case of others.

25. University employees who are in the occupation/who will occupy the University quarters, but who had owned/own/become owner of the house either in their name or in the name of their spouse or family members at the place other than the place of work by availing loans shall pay the rent as per Govt. Order.
26. University quarters under each category shall be reserved for allotment to the employees of the University belonging to SC/ST as per State Government Orders issued from time to time.
27. Estate Officer is authorized to take action to evict the quarters/premises whoever occupied un-authorisedly.
28. Any matter not covered by these Regulations shall be referred to the Board with the remarks of the House Allotment Committee, whose decision shall be final and binding.
29. Any difficulty that arises in the process of implementation of the modification shall be resolved by the Board.

**LIST OF ESSENTIAL SERVICES**

**(a) HEBBAL CAMPUS:**

| | | | |
|---|---|---|---|
| 1. | A - TYPE | (i) | Director of Student Welfare |
| 2. | B - TYPE | (i) | Senior Farm Superintendent, GKVK |
| | | (ii) | Chief Medical Officer |
| 3. | C - TYPE | (i) | Chief Warden |
| | | (ii) | Warden, Veterinary College Hostel, Hebbal |
| | | (iii) | Warden, Dairy Science College Hostel, Hebbal |
| | | (iv) | Warden, Kalpatharu Girls' Hostel, Hebbal |
| | | (v) | Asst.Executive Engineer (Auto)/(Civil) |
| | | (vi) | Farm Superintendent/Sr.Farm Superintendent, MRS, Hebbal. |
| | | (vii) | Asst. Professor, Veterinary Hospital, Hebbal |
| | | (viii) | Assistant Librarian |
| | | (ix) | Farm Manager(Poultry), Hebbal |
| | | (x) | Dairy Farm Superintendent, Hebbal |
| | | (xi) | Asst.Professor of Physical Education, Hebbal. |
| 4. | D - TYPE | (i) | Junior Enginee(Elec) |
| | | (ii) | Assistant Engineer (civil) |
| | | (iii) | Library Assistant |
| 5. | E - TYPE | (i) | Compounder (Dispensary) |
| | | (ii) | Compounder/Attender(Vety-Hospital), Hebbal |
| | | (iii) | Dairy Attender, Hebbal |
| | | (iv) | Poultry Attender, Hebbal |
| | | (v) | Driver of Vice Chancellor |
| | | (vi) | Driver of Estate Officer |
| | | (vii) | Driver of Comptroller |
| | | (viii) | Driver of Director of Research |
| | | (ix) | Driver of Registrar |
| | | (x) | Driver of Director of Instruction(Agri) |
| | | (xi) | Driver of Director of Instruction(Vety) |
| | | (xii) | Director of Extension |
| | | (xiii) | Driver of FTI/EEU, Hebbal |
| | | (xiv) | Drivers of Transport Section-5 nos. |
| 6. | G - TYPE | (i) | Cook-cum-Caretaker(Cauvery and Arkavathi Guest Houses) |
| | | (ii) | Plumber |
| | | (iii) | Library Attender |
| | | (iv) | Sports Helper |
| | | (v) | Hostel Worker |
| | | (vi) | Wireman |
| | | (vii) | Driver (LV) – 4 nos. |
| **(b) GKVK CAMPUS :** | | | |
| 1. | C - TYPE | (i) | Chief Warden/Warden of Hostel |
| | | (ii) | Assistant Medical Officer |
| 2. | D - TYPE | (i) | Wardens (Teachers Hostel) : 2 nos. |
| | | (ii) | Assistant Librarian |
| | | (iii) | Library Assistant |
| | | (iv) | Asst.Engineer(Maintenance)/Jr.Engineer (Maintenance) |
| | | (v) | Assistant Professor of Physical Education |
| | | (vi) | Sr.Assistant (Stores), ZARS, GKVK |
| | | (vii) | Sr. Field Assistant, ZARS, GKVK |
| 3. | E - TYPE | (i) | Compounder (Dispensary) |
| | | (ii) | Sub-Station Operator |
| | | (iii) | Driver (L.V.) |
| | | (iv) | Wireman |
| | | (v) | Field Assistant |
| | | (vi) | Tractor Driver |
| 4. | F - TYPE | (i) | Library Attender |
| | | (ii) | Sports Helper |
| | | (iii) | Hostel Worker |
| 5. | G - TYPE | (i) | Watchman |
| | | (ii) | 4 nos. (G – TYPE) quarters as essential quarters for Messenger/Attender/Pump Attender/Farm Labourers, etc. |

**NOTE:-** All the Officials listed as essential service must occupy the quarters when allotted to them and pay the normal rent and be available in the Campus at all time.

**ESTATE OFFICER**
University of Agricultural Sciences
GKVK, Bangalore-560065

**UNIVERSITY OF AGRICULTURAL SCIENCES**
**Estate Office, GKVK Campus, Bangalore-560065**
**NOTIFICATION**
**NO.EO\HAC\S-9\2004-05, Dt: 13th Agusut 2004**

The Board at its 305th Meeting held on 2-6-2004, Vide Item-7 approved the proposed amendment to the existing Clause-5(a) of the House Allotment Regulations as per Government Circulars (1) No.PWD\394\PPM\99 dated: 19-7-2001 and (2) No.PWD\394\PPM\99 dated: 29-8-2002 for fixing House rent to the University quarters. The House Rent\Licence Fee for each type of quarters would be actual house rent allowance received by the occupants of the University quarters from A-Type to F-Type quarters. For G-Type miscellaneous quarters 50% of HRA to be colleted. The amended revision of House Rent will come into effect from 2-6-2004 the date of decision of the Board.

This is applicable to all the University quarters and this Notification supercedes the earlier Notifications\Circulars in this regard.

**ESTATE OFFICER**
University of Agricultural Sciences
GKVK, Bangalore-560065

PD-53

**ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕಾರವಾರ ವಿಭಾಗ,**
**ಕಾರವಾರ (ಉ.ಕ) ಇವರ ನ್ಯಾಯಾಲಯ, ಕಾರವಾರ**
**ಕ್ರಸಂ: ಎ3:ಸಿಓಸಿ:ವಿವ-8/01-02 ದಿನಾಂಕ: 7ನೇ ಆಗಸ್ಟ್ 2004**

**ಉಪಸ್ಥಿತರು :** ಶ್ರೀ ಜಿ. ವಿ. ರಂಗರಾವ್, ಭಾಅಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ.

| ಫಿರ್ಯಾದುದಾರರು : | ವಿರುದ್ಧ | ಆರೋಪಿಗಳು : |
|---|---|---|
| 1. ವಲಯ ಅರಣ್ಯ ಅಧಿಕಾರಿ, ಮಾಸ್ತಿಕಟ್ಟಾ | | 1. ಶ್ರೀ ರಾಮ ವೆಂಕಣ್ಣ ನಾಯ್ಕ, ವರ್ಷ 64, ಉದ್ಯೋಗ: ಬಿಜಿನೆಸ್ ಸಾ: ನೆಲ್ಲಿಕೇರಿ, ತಾ: ಕುಮಟಾ |
| | | 2. ಶ್ರೀ ರಾಜು ಬೀರಪ್ಪಾ ಹರಿಕಂತ್ರ, ವರ್ಷ 23, ಸಾ: ಹೊಸಕಂಬಿ, ಕೊಳಗೆ. |
| | | 3. ಶ್ರೀ ನಾಗರಾಜ ವೆಂಕಟ್ರಮಣ ನಾಯ್ಕ, ವರ್ಷ 20, ಉದ್ಯೋಗ: ವಾಹನಚಾಲಕ ಸಾ: ಕುಮಟಾ. |

**ಪ್ರಸ್ತಾವನೆ:**

ಮಾಸ್ತಿಕಟ್ಟಾ ವಲಯದ ಸಿಬ್ಬಂದಿಗಳಾದ ಶ್ರೀ ಸುಧಾಕರ ಗಂಗಾಧರ ಗುನಗಾ, ವಯಸ್ಸು 52 ವನಪಾಲಕ ಅಗಸೂರು ಹಾಗೂ ಇತರೇ ಸಿಬ್ಬಂದಿಯವರು ಕೂಡಿಕೊಂಡು ದಿನಾಂಕ: 23.03.2002 ರಂದು ರಾತ್ರಿ ಸುಂಕಸಾಳ ಹಾಗೂ ಹೊಸಕಂಬಿ ಪ್ರದೇಶದಲ್ಲಿ ಗಸ್ತು ತಿರುಗುತ್ತಾ ಇರುವಾಗ ಸುಮಾರು ರಾತ್ರಿ 3.30 ಗಂಟೆಗೆ ಹೊತ್ತಿಗೆ ಹೊಸಕಂಬಿ ಗೇಟಿನಿಂದ ಪಾಸಾಗಿ ಬರುತ್ತಿರುವ ಕೆಎ-30/85 ರಿಜಿಸ್ಟರ್ ನಂಬರ್ ಹೊಂದಿದ ಅಂಬಾಸಿಡರ್ ಕಾರನ್ನು ಸಹಜ ಗುಮಾನಿ ಕಾರಣದಿಂದ ಮಾಸ್ತಿಕಟ್ಟಾ ಬದಿಗೆ ಎನ್. ಹೆಚ್. 63 ರಸ್ತೆಗೆ ಕೂಡುವ 100 ಮೀಟರ್ ಅಂತರದಲ್ಲಿ ತಡೆದು ನಿಲ್ಲಿಸಿ ತಪಾಸಿಸಿ ನೋಡಲಾಗಿ ಸದರಿ ಅಂಬಾಸಿಡರ್ ಕಾರ್ ನಂ. ಕೆಎ-30/85 ನೇದ್ದರ ಡಿಕ್ಕಿಯಲ್ಲಿ ಸಾಗ ತುಂಡುಗಳು 6 (ಆರು) ಕಂಡು ಬಂದಿವೆ. ಹಾಗೂ ಹೆಚ್ಚಿನ ತಪಾಸಣೆ ಮಾಡಲಾಗಿ ಸೀಟಿನ ಕೆಳಗಡೆಯಲ್ಲಿ 2 (ಎರಡು) ಸೀಸಂ ತುಂಡುಗಳು ಇದ್ದದ್ದು ಕಂಡು ಬಂದಿದೆ. ಸದರಿ ಸಾಗ ಸೀಸಂ ತುಂಡುಗಳಿಗೆ ಸರ್ಕಾರಿ ಛಪ್ಪಾ ನಂಬರ್ ವಗೈರೆ ಇರುವ ಬಗ್ಗೆ ಪರಿಶೀಲಿಸಲಾಗಿ ಆ ರೀತಿಯ ಯಾವುದೇ ಸರ್ಕಾರಿ ಛಪ್ಪಾ ಅಥವಾ ನಂಬರು ಇದ್ದದ್ದು ಕಂಡು ಬರಲಿಲ್ಲ. ಕೂಡಲೇ ಕಾರಿನಲ್ಲಿ ಇದ್ದ ಕಾರಿನ ಡ್ರೈವರ್ ಹಾಗೂ ಇನ್ನೋರ್ವ ವ್ಯಕ್ತಿಯನ್ನು ಹಿಡಿದು, ವಲಯ ಅರಣ್ಯ ಅಧಿಕಾರಿ, ಮಾಸ್ತಿಕಟ್ಟಾ ಇವರ ಎದುರು ಹಾಜರುಪಡಿಸಿ ವಿಚಾರಿಸಲಾಗಿ ಸದರಿ ಕಾರಿನಲ್ಲಿ ಅನಧಿಕೃತವಾಗಿ ಹೇರಿದ ತುಂಡುಗಳನ್ನು ಹಿಲ್ಲೂರು ಭಜನೆ ಕಟ್ಟೆಯ ಹತ್ತಿರ ರಸ್ತೆ ಸೈಡ್‌ನಲ್ಲಿ ಅನಧಿಕೃತವಾಗಿ ತುಂದು ತುಂಬಿದ್ದು ಇರುತ್ತದೆ ಅಂತಾ ಹೇಳಿಕೆ ನೀಡಿದ್ದು ಇರುತ್ತದೆ.

ಈ ಪ್ರಕರಣ ನಡೆದ ಸಮಯವು ರಾತ್ರಿಯ ಸುಮಾರು 4-00 ಗಂಟೆ ಆಗಿದ್ದರಿಂದ ಅಲ್ಲಿ ಸಮೀಪದಲ್ಲಿ ಯಾರೂ ಪಂಚ ಜನರು ಪಂಚನಾಮೆಗೆ ಸಿಗದೇ ಇದ್ದದ್ದರಿಂದ, ಸ್ಥಳದಲ್ಲಿ ಲಭ್ಯವಿರುವ ಇಲಾಖಾ ಸಿಬ್ಬಂದಿಯವರನ್ನೇ ಪಂಚರನ್ನಾಗಿ ಮಾಡಿ ಸದರಿ ಗುನ್ನೆಯಲ್ಲಿ ಉಪಯೋಗ ಮಾಡಲಾದ ವಾಹನ ಕಾರ್ ನಂ. ಕೆಎ-30/85 ಹಾಗೂ ಅದರಲ್ಲಿ ಅನಧಿಕೃತವಾಗಿ ಸಾಗಿಸುತ್ತಿದ್ದ ಸಾಗ ಮತ್ತು ಸೀಸಂ ತುಂಡುಗಳನ್ನು (6+2=8 ತುಂಡುಗಳು) ಪಂಚನಾಮೆ ಮಾಡಲಾಗಿದೆ. ಸದರಿ ಕಾರ್ ಡ್ರೈವರ್ ಹಾಗೂ ಕಾರಿನಲ್ಲಿದ್ದ ಇನ್ನೋರ್ವನಿಗೆ ಕಾರಿನಲ್ಲಿ ಯಾವುದೇ ಸರ್ಕಾರಿ ಛಪ್ಪಾ, ನಂಬರ್ ಇತ್ಯಾದಿ ಇಲ್ಲದೇ ದೊರಕಿದ ಮಾಲಿನ ಕುರಿತು, ಯಾವುದೇ ಅಧಿಕೃತ ಪಾಸ್ ಅಥವಾ ಪರ್ಮಿಟ್ ಇದ್ದ

ಬಗ್ಗೆ ವಿಚಾರಿಸಲಾಗಿ ಸದರಿ ಸಾಗ ವ ಸೀಸಂ ಮಾಲಿಗೆ ಸಂಬಂಧಿಸಿದಂತೆ ಯಾವುದೇ ಅಧಿಕೃತ ಪಾಸ್ ಯಾ ಪರ್ಮಿಟ್ ಇಲ್ಲದ್ದನ್ನು ಖಾತ್ರಿಪಡಿಸಿಕೊಳ್ಳಲಾಗಿದೆ. ಹಾಗೂ ಸದರಿ ಅರಣ್ಯ ಉತ್ಪನ್ನಗಳಾದ ಸಾಗ, ಸೀಸಂ ತುಂಡುಗಳನ್ನು ಕಳುವಿನಿಂದ ತಂದಿರುವುದು ದೃಢಪಡಿಸುತ್ತದೆ. ಸದರಿ ಮಾಲಿನ ಅಳತೆ ಮಾಡಲಾಗಿ ಸಾಗ ತುಂಡುಗಳು-6 ಹಾಗೂ ಸೀಸಂ ತುಂಡುಗಳು 2 ಒಟ್ಟು 8 ತುಂಡುಗಳಿಗೆ-0.185 ಘಮೀ. ಇರುವುದಾಗಿ ಅಳತೆ ಮಾಡಲಾಗಿದೆ. ವಶಪಡಿಸಿಕೊಂಡ ಕಾರಿನ ವಿವರ ಅಂದರೆ ಇಂಜಿನ್ ನಂ. ಡಿ-304449 ಚಾಸಿ ರಿ. ನಂ. 111-608808 ಇರುತ್ತದೆ. ಸದರಿ ಪ್ರಕರಣದಲ್ಲಿ ಜಪ್ತಿ ಮಾಡಲಾದ ಸಾಗ ಹಾಗೂ ಸೀಸಂ ತುಂಡುಗಳನ್ನು ಇಲಾಖಾ ತಾಬಾಕ್ಕೆ ತೆಗೆದುಕೊಂಡು ಅವುಗಳಿಗೆ (T) ನಿಶಾನೆ ಮಾಡಿ ನಂಬರ್ ಹಾಕಿದ್ದು ಇರುತ್ತದೆ. ಹಾಗೂ ಗುನ್ಹೆಯಲ್ಲಿ ಬಳಸಲಾದ ವಾಹನವನ್ನು ಹಾಗೂ ಮಾಲನ್ನು ಭದ್ರತೆಯ ಸಲುವಾಗಿ ವಲಯ ಅರಣ್ಯ ಅಧಿಕಾರಿ, ಅಂಕೋಲಾ ಇವರ ತಾಬಾಕ್ಕೆ ವಹಿಸಿಕೊಟ್ಟಿದ್ದು ಇರುತ್ತದೆ.

ನಂತರ ಪ್ರಸಕ್ತ ಕೇಸಿನ ವಿಚಾರಣೆ ಪ್ರಾರಂಭಿಸುವ ಸಲುವಾಗಿ ವಾಹನದ ಮಾಲೀಕರಾದ ಶ್ರೀ ರಾಮ ವೆಂಕಣ್ಣ ನಾಯ್ಕ ಸಾ: ನೆಲ್ಲಿಕೇರಿ, ಪೋ: ಕುಮಟಾ ಇವರಿಗೆ ಕಾರಣ ಕೇಳುವ ನೋಟಿಸನ್ನು ಈ ನ್ಯಾಯಾಲಯದಿಂದ ತಾ: 25.02.2002 ರಂದು ಹೊರಡಿಸಲಾಯಿತು. ಅದಕ್ಕೆ ಅರ್ಜಿದಾರರು ತಮ್ಮ ನ್ಯಾಯವಾದಿಗಳ ಮುಖಾಂತರ ತಾ: 4.3.2002 ರಂದು ಉತ್ತರಿಸುತ್ತಾ ಸದರಿ ವಾಹನ ನಂ. ಕೆಎ-30/85 ವನ್ನು ಬಾಡಿಗೆಯ ಟ್ಯಾಕ್ಸಿಯಾಗಿ ನಡೆಸುತ್ತಿದ್ದು, ತನ್ನ ವಾಹನದ ಚಾಲಕನಿಗೆ ಸದರಿ ವಾಹನವನ್ನು ಯಾವುದೇ ರೀತಿಯ ಪ್ರತಿಬಂಧಿತ ಕೆಲಸಗಳಿಗಾಗಿ ಉಪಯೋಗಿಸಬಾರದೆಂಬುದಾಗಿ ಹೇಳಿದ್ದುದ್ದಾಗಿ ತಿಳಿಸುತ್ತಾ ಅನಧಿಕೃತ ಅರಣ್ಯ ಉತ್ಪನ್ನದ ಕಳ್ಳ ಸಾಗಾಣಿಕೆ ತನಗೆ ಗೊತ್ತಿಲ್ಲದೇ ಆಗಿರುವುದರಿಂದ ತಾವು ಅಪರಾಧಿ ಎಂದು ನ್ಯಾಯಾಲಯ ನಿರ್ಧರಿಸಲಾಗದು. ಆದ್ದರಿಂದ ಸದರಿ ವಾಹನವನ್ನು ತನಗೆ ಬಿಟ್ಟು ಕೊಡಬೇಕಾಗಿ ವಿನಂತಿಸುತ್ತಾರೆ. ಮುಂದುವರೆಯುತ್ತಾ ನ್ಯಾಯಾಲಯವು ವಿಧಿಸುವ ಶರ್ತುಗಳಿಗೊಳಪಟ್ಟು ಕೇಳಿದಾಗ ವಾಹನವನ್ನು ನ್ಯಾಯಾಲಯಕ್ಕೆ ಹಾಜರಪಡಿಸಲು ಕಬೂಲ ಇದ್ದು ಮಾನ್ಯ ನ್ಯಾಯಾಲಯವು ವಾಹನವನ್ನು ಬಿಡುಗಡೆಗೊಳಿಸಲು ಕೋರಿದ್ದಾರೆ.

ಸದರಿ ಅರಣ್ಯ ಅಪರಾಧದಲ್ಲಿ ಉಪಯೋಗಿಸಲಾದ ವಾಹನ ಅಂಬಾಸಿಡರ್ ಕಾರ್ ನಂ. ಕೆಎ-30/85 ವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂಬ ವಿನಂತಿಯನ್ನು ಪರಿಶೀಲಿಸಿ ಈ ನ್ಯಾಯಾಲಯವು ತಾ: 3.6.2002 ರಡಿಯಲ್ಲಿ ಹೊರಡಿಸಿದ ಆದೇಶದಲ್ಲಿ ವಿವರಿಸಿದ ಕಾರಣಗಳಿಗೋಸ್ಕರ ಸದರಿ ಅರ್ಜಿದಾರರ ವಿನಂತಿಯನ್ನು ತಿರಸ್ಕರಿಸಲಾಗಿದೆ.

ಸದರಿ ಆದೇಶದ ವಿರುದ್ಧ ಅರ್ಜಿದಾರರು ಮಾನ್ಯ ಡಿಸ್ಟ್ರಿಕ್ಟ್ ಹಾಗೂ ಸೆಷನ್ಸ್ ಜಡ್ಜ್, ಕಾರವಾರ ಇವರಲ್ಲಿ ಕ್ರಿಮಿನಲ್ ಅಪೀಲ್ ನಂ. 57/2002 ರಡಿಯಲ್ಲಿ ಅಪೀಲು ಮಾಡಿಕೊಳ್ಳಲಾಗಿ, ಮಾನ್ಯ ನ್ಯಾಯಾಲಯವು ತಾ: 19.7.2002ರ ಆದೇಶದಲ್ಲಿ ಅರ್ಜಿದಾರರ ಮನವಿಯನ್ನು ತಳ್ಳಿಹಾಕುತ್ತಾ ಈ ನ್ಯಾಯಾಲಯದ ಆದೇಶವನ್ನು ಎತ್ತಿ ಹಿಡಿದಿದೆ.

ಈ ಸಂಬಂಧವಾಗಿ ತಾ: 4.3.2002 ರಿಂದ 13.2.2004ರ ವರೆಗೆ ನ್ಯಾಯಾಲಯದಲ್ಲಿ ವಿಚಾರಣೆ ನಡೆಸಿ ವಾದಿ ಹಾಗೂ ಪ್ರತಿವಾದಿಗಳ ಹೇಳಿಕೆ ದಾಖಲೆಗಳನ್ನು ಪರಿಶೀಲಿಸಲಾಯಿತು.

**ಅಭಿಯೋಜನೆಗಳ ಪರ ಸಾಕ್ಷಿಗಳು:**

1) ಶ್ರೀ ಸುಧಾಕರ ಗಂಗಾಧರ ಗುನಗಾ, ವನಪಾಲಕ, ಅಗಸೂರು

2) ಶ್ರೀ ಸಿ. ಡಿ. ಗುನಗಿ, ವಯಸ್ಸು 48, ಪಂಚರು.

**ಪ್ರತಿವಾದಿಗಳ ಪರವಾಗಿ:**

1) ಶ್ರೀ ರಾಮಾ ವೆಂಕಣ್ಣ ನಾಯಕ, ವಯಸ್ಸು 65
ವಾಸಸ್ಥಳ: ಕುಮಟಾ, ವಾಹನದ ಮಾಲೀಕರು

ಸಾಕ್ಷಿಗಳ ಹೇಳಿಕೆ ಹಾಗೂ ಪಾಟೀ ಸವಾಲುಗಳಿಗೆ ಉತ್ತರಗಳನ್ನು ದಾಖಲು ಮಾಡಿಕೊಳ್ಳಲಾಯಿತು.

ಸಾಕ್ಷಿಗಳ ಹೇಳಿಕೆಗಳನ್ನು ಅವಲೋಕಿಸಿದ ನಂತರ ಪ್ರಕರಣಕ್ಕೆ ಸಂಬಂಧಿಸಿದ ಅರ್ಜಿದಾರರ ವಕೀಲರ ಮತ್ತು ಸರ್ಕಾರದ ಪರ ವಕೀಲರ ಲಿಖಿತ ವಾದ ವಿವಾದಗಳನ್ನು ಆಲಿಸಿದ ನಂತರ ಹಾಗೂ ಹಾಜರುಪಡಿಸಿದ ದಾಖಲೆಗಳನ್ನು ಅವಲೋಕಿಸಿದಾಗ ಈ ಕೆಳಗಿನ ಪ್ರಶ್ನೆಗಳು ಉದ್ಭವಿಸುತ್ತವೆ.

ಅ) ಈ ಪ್ರಕರಣದಲ್ಲಿ ಸರ್ಕಾರಿ ಸ್ವತ್ತುಗಳಾದ ಸಾಗವಾನಿ ಹಾಗೂ ಸೀಸಂ ತುಂಡುಗಳನ್ನು ಪರವಾನಗಿ ಇಲ್ಲದೇ ಸಾಗಾಟವಾದ ಬಗ್ಗೆ ಗುನ್ಹೆ ಆಗಿದೆಯೇ?

ಆ) ಮೇಲೆ ನಮೂದಿಸಿದ ಸಾಗವಾನಿ ಸೀಸಂ ತುಂಡುಗಳ ಕಳ್ಳ ಸಾಗಾಣಿಕೆ ಮಾಡುವಲ್ಲಿ ಅಂಬಾಸಿಡರ್ ಕಾರ್ ನಂ. ಕೆಎ-30/85 ಎಂಬ ವಾಹನವನ್ನು ಉಪಯೋಗ ಮಾಡಲಾಗಿದೆಯೇ?

ಇ) ಈ ಗುನ್ಹೆಯನ್ನು ವಾಹನದ ಮಾಲೀಕ, ಅವನ ಏಜೆಂಟ್ ಅಥವಾ ಅದರ ಜವಾಬ್ದಾರಿ ಹೊಂದಿದ ವ್ಯಕ್ತಿಗಳಿಗೆ ಗೊತ್ತಿದ್ದು ಮಾಡಲಾಗಿದೆಯೇ? ಹಾಗೂ ಅವರು ಈ ಗುನ್ಹೆಯಲ್ಲಿ ಶಾಮೀಲಾಗಿದ್ದಾರೆಯೇ? ಹಾಗೂ ಈ ವಾಹನವನ್ನು ಸಾಗವಾನಿ, ಸೀಸಂ ತುಂಡುಗಳ ಕಳ್ಳ ಸಾಗಾಣಿಕೆಗೆ ಬಳಕೆಯಾಗದಂತೆ ವಾಹನದ ಮಾಲೀಕ, ಅವನ ಏಜೆಂಟ ಅಥವಾ ಈ ವಾಹನದ ಜವಾಬ್ದಾರಿ ಹೊಂದಿದವರು ಸಾಕಷ್ಟು ಮುಂಜಾಗ್ರತಾ ಕ್ರಮ ಕೈಕೊಳ್ಳಲು ವಿಫಲರಾಗಿದ್ದಾರೆಯೇ?

ಈ) ಈ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 71ಎ ಅಧಿನಿಯಮದಡಿಯಲ್ಲಿ ಮುಟ್ಟುಗೋಲು ಹಾಕಿಕೊಳ್ಳಬಹುದೇ?

**ಮೇಲ್ಕಂಡ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸುತ್ತೇನೆ.**

ಅಂಶ ನಂ. (ಅ) - ಹೌದು

ಅಂಶ ನಂ. (ಆ) - ಹೌದು

ಅಂಶ ನಂ. (ಇ) - ಹೌದು

ಅಂಶ ನಂ. (ಈ) - ಹೌದು

ಕಾರಣಗಳನ್ನು ಈ ಕೆಳಗಿನಂತೆ ವಿವರಿಸಿದೆ.

ಅ) ಈ ಪ್ರಕರಣದಲ್ಲಿ 6 ಸಾಗವಾನಿ ತುಂಡುಗಳನ್ನು ಹಾಗೂ 2 ಸೀಸಂ ತುಂಡುಗಳನ್ನು ಒಟ್ಟು 8 ತುಂಡು 0.185 ಘಮೀ. ಅಮಾನತ್ತುಪಡಿಸಿದೆ. ಅವುಗಳಿಗೆ ಪೇಂಟಿನಿಂದ ನಂಬರ್ ಹಾಕಿ (T) ಗುರುತು ಮಾಡಿದೆ. ಈ ಬಗ್ಗೆ ಮಹಜರ್‌ನಲ್ಲಿ (ಎಕ್ಸ್-ಪಿ1) ನಲ್ಲಿ ನಮೂದಿಸಿದೆ. ಹಾಗೂ ಪ್ರಥಮ ಮಾಹಿತರ ವರದಿ ನಂ. 12/2001-02 ದಿನಾಂಕ: 23.02.2002 ರಲ್ಲಿ (ಎಕ್ಸ್-ಪಿ2) ಕೂಡ ನಮೂದಿಸಿದೆ. ಈ ಬಗ್ಗೆ ವಾಹನ ಚಾಲಕ ಹಾಗೂ ವಾಹನದಲ್ಲಿ ಹಿಡಿಯಲಾದ ಇನ್ನೊಬ್ಬ ಅಪರಾಧಿ ಇವರು ಹೇಳಿಕೆ ನೀಡಿ ಸದರಿ ತುಂಡುಗಳನ್ನು ಅನಧಿಕೃತವಾಗಿ ಅರಣ್ಯ ಪ್ರದೇಶ (ಹಿಲ್ಲೂರು ಭಜನೆ ಕಟ್ಟೆಯ ಹತ್ತಿರ) ತಂದು ತುಂಬಿದ್ದಾಗಿ ಹೇಳಿದ್ದಾರೆ. ಸಾಗವಾನಿ, ಸೀಸಂ ಕಟ್ಟಿಗೆಯನ್ನು ಯಾವುದೇ ಸ್ಥಳದಿಂದ ವಾಹನತೂಕಪಡಿಸಬೇಕಾದರೆ ಸೂಕ್ತ ರಹದಾರಿ ಪಾಸು ಇರಬೇಕಾಗುತ್ತದೆ. ಜಪ್ತಿ ಮಾಡಲಾದ ಸಾಗವಾನಿ, ಸೀಸಂ ತುಂಡುಗಳಿಗೆ ಯಾವುದೇ ಅಧಿಕೃತ ದಾಖಲೆಗಳಾಗಲೀ, ಪಾಸ್ ವ ಪರ್ಮೀಟಾಗಲೀ ಇರುವುದಿಲ್ಲ. ಈ ಎಲ್ಲಾ ಕಾರಣಗಳಿಂದ ಈ ಪ್ರಕರಣದಲ್ಲಿ ಸರ್ಕಾರಿ ಸ್ವತ್ತಾದ ಸಾಗವಾನಿ, ಸೀಸಂ ತುಂಡುಗಳನ್ನು ಬಿನ್ ಪರವಾನಗಿಯಿಂದ ಸಾಗಾಟ ಮಾಡಿದ ಬಗ್ಗೆ ಗುನ್ಹೆ ಆಗಿದೆ.

ಆ) ಅರಣ್ಯ ಸಿಬ್ಬಂದಿಗಳು ಅಂಬಾಸಿಡರ್ ಕಾರ್ ನಂ. ಕೆಎ-30/85ನ್ನು ಹಿಡಿದು ಪರಿಶೀಲಿಸಿದಾಗ, ಅದರ ಡಿಕ್ಕಿಯಲ್ಲಿ ಹಾಗೂ ಸೀಟಿನಡಿಯಲ್ಲಿ ಸಾಗವಾನಿ 6 ತುಂಡು ಹಾಗೂ ಸೀಸಂ 2 ತುಂಡುಗಳು ಇದ್ದದ್ದು ಕಂಡು ಬಂದಿದೆ. ವಾಹನದ ನಂ. ಕೆಎ-30/85 ಆಗಿದ್ದುದನ್ನು ಪಂಚನಾಮೆ (ಎಕ್ಸ್-ಪಿ1) ಪ್ರಥಮ ಮಾಹಿತಿ ವರದಿ (ಎಕ್ಸ್-ಪಿ2)ಗಳಲ್ಲಿ ನಮೂದಿಸಲಾಗಿದೆ. ಮಹಜರಿನಲ್ಲಿ ಹೇಳಿದ ಅಂಶಗಳು ಹಾಗೂ ಸಾಕ್ಷಿಗಳ ಹೇಳಿಕೆಗಳು ಒಂದಕ್ಕೊಂದು ಹೊಂದಾಣಿಕೆ ಆಗುತ್ತದೆ. ಈ ಕಾರಣಗಳಿಂದಾಗಿ ಸದರಿ ವಾಹನ ಅಂಬಾಸಿಡರ್ ಕಾರ್ ನಂ. ಕೆಎ-30/85ನ್ನು ಮೇಲೆ ನಮೂದಿಸಿದ ಸಾಗವಾನಿ, ಸೀಸಂ ತುಂಡುಗಳ ಕಳ್ಳ ಸಾಗಾಣಿಕೆಯಲ್ಲಿ ಉಪಯೋಗಿಸಿದ್ದು ದೃಢಪಡುತ್ತದೆ.

ಇ) ಈ ಪ್ರಕರಣದಲ್ಲಿ ಅರಣ್ಯ ಕಳ್ಳ ಸಾಗಾಣಿಕೆಯ ಕಾರಣದಿಂದಾಗಿ ಜಪ್ತಿ ಮಾಡಿದ ವಾಹನದ ಮಾಲೀಕರಾದ ಶ್ರೀ ರಾಮಾ ವೆಂಕಣ್ಣ ನಾಯಕ ಸಾ: ನೆಲ್ಲಿಕೇರಿ ಇವರು ವಿಚಾರಣಾ ಸಮಯದಲ್ಲಿ ಉತ್ತರಿಸುತ್ತಾ ದಿನಾಂಕ: 22.2.2002 ರಂದು ಸದರಿ ವಾಹನಕ್ಕೆ ನಾಗರಾಜ ಈತನನ್ನು ವಾಹನ ಚಾಲಕನನ್ನಾಗಿ ಮದುವೆ ಕಾರ್ಯಕ್ರಮ ಇರುವುದರಿಂದ ಭಟ್ಕಳಕ್ಕೆ ತನ್ನ ಕಾರನ್ನು ಕಳುಹಿಸಿದ್ದಾಗಿ ತನ್ನ ಕಾರು ದಿನಾಂಕ: 22.2.2002 ರಂದು ತಿರುಗಿ ಬಾರದೇ ಇದ್ದುದರಿಂದ ತಾನು ಕುಮಟಾ ಪೋಲಿಸ್ ಸ್ಟೇಶನಿಗೆ ಫಿರ್ಯಾದನ್ನು ಕೊಟ್ಟಿರುವುದಾಗಿ ಹೇಳಿಕೆ ನೀಡಿದರು. ಆದರೂ ಅವರ ಹೇಳಿಕೆಯನ್ನು ನಿರ್ಧರಿಸಲು ಪೋಲಿಸ್ ಸ್ಟೇಶನಿಗೆ ನೀಡಿದ ರಿಪೋರ್ಟ್‌ಗಳನ್ನಾಗಲೀ ಅಥವಾ ಪ್ರಕರಣಕ್ಕೆ ಸಂಬಂಧಿಸಿದ ಯಾವುದೇ ದಾಖಲೆಗಳನ್ನಾಗಲೀ ವಿಚಾರಣೆ ಕಾರಣಕ್ಕೆ ಹಾಜರುಪಡಿಸಿರುವುದಿಲ್ಲ. ಸದರಿ ವಾಹನದ ಅಧಿಕೃತ ಮಾಲೀಕ ತಾನು ಇರುವುದನ್ನು ಒಪ್ಪಿಕೊಂಡು ದೃಢೀಕರಿಸುತ್ತಾ ವಾಹನದ ಚಾಲಕನು ಮಾಡಿದ ಅರಣ್ಯ ಅಪರಾಧ ತನಗೆ ಗೊತ್ತಿಲ್ಲದೇ ಆಗಿದೆ. ಆದ್ದರಿಂದ ತನ್ನ ವಾಹನವನ್ನು ಬಿಟ್ಟು ಕೊಡಬೇಕೆಂದು ನೀಡಿದ ಹೇಳಿಕೆಗಳನ್ನು ಪರಿಶೀಲಿಸಲಾಗಿ ಸದರಿ ವಾಹನದ ಮಾಲೀಕರು ಇವರೇ ಇದ್ದು ಇವರು ನೇಮಿಸಿದ ಚಾಲಕನಿಂದ ಅರಣ್ಯ ಅಪರಾಧ ಗುನ್ಹೆ ಆಗಿದ್ದನ್ನು ಪಂಚನಾಮೆ (ಎಕ್ಸ್-ಪಿ1) ಪ್ರಥಮ ಮಾಹಿತಿ ವರದಿ ನಂ. 12/01-02 (ಎಕ್ಸ್-ಪಿ2) ಹಾಗೂ ವಾಹನ ಚಾಲಕರ ಹೇಳಿಕೆಗಳು ದೃಢೀಕರಿಸುತ್ತದೆ. ವಾಹನದ ಮಾಲೀಕರು ಸದರಿ ವಾಹನವು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಗೆ ಉಪಯೋಗಿಸಬಾರದೆಂಬ ಬಗ್ಗೆ ತನ್ನ ಏಜೆಂಟ್ ಅಥವಾ ವಾಹನ ಚಾಲಕ ಇವರಿಗೆ ಸೂಕ್ತ ತಿಳುವಳಿಕೆ ನೀಡಿದ ಬಗ್ಗೆ ಯಾವುದೇ ದಾಖಲೆಗಳನ್ನು ಹಾಜರುಪಡಿಸಿಲ್ಲವಾದ್ದರಿಂದ ಸದರಿ ಅರಣ್ಯ ಅಪರಾಧವು ಅವನ ಏಜಂಟ ಅಥವಾ ವಾಹನ ಚಾಲಕ ಅಥವಾ ಅದರ ಜವಾಬ್ದಾರಿ ಹೊಂದಿದ ವ್ಯಕ್ತಿಗಳಿಗೆ ಗೊತ್ತಿದ್ದು ಮಾಡಲಾಗಿದೆ ಎಂದು ಕಂಡು ಬರುತ್ತದೆ. ಹೀಗಾಗಿ ವಾಹನದ ಮಾಲೀಕರು, ಅವರ ಏಜೆಂಟ, ವಾಹನದ ಚಾಲಕ ಅಥವಾ ಈ ವಾಹನದ ಜವಾಬ್ದಾರಿಯನ್ನು ಹೊಂದಿದವರು ಸದರಿ ವಾಹನವು ಸಾಗವಾನಿ, ಸೀಸಂ ತುಂಡುಗಳ ಕಳ್ಳ ಸಾಗಾಣಿಕೆಯಲ್ಲಿ ಬಳಕೆಯಾಗದಂತೆ ಸೂಕ್ತ ಮುಂಜಾಗರೂಕತಾ ಕ್ರಮವನ್ನು ತೆಗೆದುಕೊಳ್ಳುವಲ್ಲಿ ವಿಫಲರಾಗಿದ್ದಾರೆ. ಆದ್ದರಿಂದ ಅವರು ಈ ಗುನ್ಹೆಯಲ್ಲಿ ಶಾಮೀಲಾಗಿದ್ದಾರೆಂದು ನಂಬುವುದು ಈ ನ್ಯಾಯಾಲಯಕ್ಕೆ ಅನಿವಾರ್ಯವಾಗಿದೆ.

ಈ) ಸರ್ಕಾರದ ಪರ ಸಾಕ್ಷಿಗಳನ್ನು ಅರ್ಜಿದಾರರ ಹೇಳಿಕೆಗಳನ್ನು ಪ್ರಕರಣದ ಪಂಚನಾಮೆ, ಪ್ರಥಮ ಮಾಹಿತಿ ವರದಿ ಇವೆಲ್ಲವುಗಳನ್ನು ಪರಿಶೀಲಿಸಲಾಗಿ, ವಾದ ವಿವಾದಗಳನ್ನು ಆಲಿಸಲಾಗಿ, ಅಂಬಾಸಿಡರ್ ಕಾರ್ ನಂಬರ್ ಕೆಎ-30/85 ಇದು ಪ್ರಥಮ ಮಾಹಿತಿ ವರದಿ ನಂ. 12/01-02 ದಿನಾಂಕ: 23.2.2002 ರಡಿಯಲ್ಲಿ ಅರಣ್ಯ ಅಪರಾಧ ಪ್ರಕರಣದಡಿಯಲ್ಲಿ ಸಾಗವಾನಿ ಹಾಗೂ ಸೀಸಂ 6+2= 8 ತುಂಡು 0.185 ಘಮೀ.ಗಳನ್ನು ಅನಧಿಕೃತ ಕಳ್ಳ ಸಾಗಾಣಿಕೆ ಮಾಡುವಾಗ ಸಿಕ್ಕಿ ಬಿದ್ದದ್ದು ಸಾಬೀತಾಗಿದ್ದರಿಂದ, ಸದರಿ ಜಪ್ತಿ ಮಾಡಿದ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 71ಎ ರಡಿಯಲ್ಲಿ ಮುಟ್ಟುಗೋಲು ಹಾಕಿಕೊಳ್ಳಬೇಕೆಂಬ ಅಂಶ ಈ ನ್ಯಾಯಾಲಯಕ್ಕೆ ಮನದಟ್ಟಾಗಿದ್ದರಿಂದ ಈ ಕೆಳಗಿನಂತೆ ಆದೇಶ.

**ಆದೇಶ**

ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಜಿ. ವಿ. ರಂಗರಾವ್, ಭಾಅಸೇ, ಅಧಿಕಾರಿಯುತ ಅಧಿಕಾರಿ, ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಆದ ನಾನು ಈ ಮೂಲಕ ಆದೇಶಿಸುವುದೇನೆಂದರೆ, ಈ ಪ್ರಕರಣಕ್ಕೆ ಸಂಬಂಧಿಸಿದಂತೆ, ಕರ್ನಾಟಕ ಅರಣ್ಯ ಕಾಯ್ದೆ 1963 ಅನುಚ್ಛೇದ 71ಎ ದಿಂದ 71 ಜಿ. ವರೆಗೆ (ಈ ತಾರೀಖಿನವರೆಗೆ ಆದ ತಿದ್ದುಪಡಿ) ಪ್ರಕಾರ ಅಂಬಾಸಿಡರ್ ಕಾರ್ ನಂ. ಕೆಎ-30/85ನ್ನು ಮತ್ತು ಅದರಲ್ಲಿದ್ದ ಸಾಗವಾನಿ ತುಂಡು 6 ಹಾಗೂ ಸೀಸಂ ತುಂಡು 2 ಒಟ್ಟು 8 ತುಂಡುಗಳಿಗೆ 0.185 ಘಮೀ. ಇವುಗಳನ್ನು ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

**ವಾಹನದ ವಿವರ:**

| | | |
|---|---|---|
| ನೋಂದಣಿ ಸಂಖ್ಯೆ | : | ಕೆಎ-30:85 |
| ಇಂಜಿನ್ ನಂಬರ್ | : | ಡಿ-304449 |
| ಚಾಸಿ ನಂಬರ್ | : | 111-608808 |
| ವಾಹನದ ಮಾದರಿ | : | ಅಂಬಾಸಿಡರ್ ಕಾರು |

ಈ ಆದೇಶವನ್ನು ಹೊರಡಿಸಿದ ದಿನಾಂಕದಿಂದ 30 ದಿನಗಳ ಅವಧಿಯಲ್ಲಿ ಮೇಲ್ಮನವಿಯನ್ನು ಸಲ್ಲಿಸದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗುತ್ತದೆ. ಈ ಆದೇಶವನ್ನು ದಿನಾಂಕ: 2.08.2004 ರಂದು ಈ ನ್ಯಾಯಾಲಯದಲ್ಲಿ ಮೊಹರು ಹಾಕಿ ನನ್ನ ಸಹಿಯೊಂದಿಗೆ ಬಿಡುಗಡೆ ಮಾಡಿರುತ್ತೇನೆ.

**ಜಿ. ವಿ. ರಂಗರಾವ್, ಭಾಅಸೇ.,**

ಪಿ.ಆರ್.1212 ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ**

**ನಮೂನೆ-10**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ, 1959ರ ಅಡಿಯಲ್ಲಿ ರೂಪಿಸಲಾಗಿರುವ ನಿಯಮಗಳನ್ವಯ 38ನೇ ರೂಲಿನ 7ನೆಯ ಕಾಲಂ ಪ್ರಕಾರ ನೀಡಿರುವ 'ಸೇಲ್ ಸರ್ಟಿಫಿಕೇಟ್'

**ಹೆಸರು:** ಶ್ರೀ ಬಿ. ಟಿ. ಜಯರಾಮಪ್ಪ
ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ.

**ಅಮಲ್ಜಾರಿ ಅರ್ಜಿಸಂಖ್ಯೆ: 620/2002-03**

**ಪ್ರಧಾನ ವ್ಯವಸ್ಥಾಪಕರು, ದಿ ಹಿರಿಯೂರು ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ., ಹಿರಿಯೂರು-ಡಿಕ್ರಿದಾರರು**

**ವಿರುದ್ಧ**

**ಶ್ರೀಮತಿ ಎಂ. ವಿ. ಶಿವಮ್ಮ ತಂದೆ ಬಿ. ವೀರಯ್ಯ, ಸೂರ್ಯ ಹೊಟೇಲ್ ಮುಂಭಾಗ, ಹಿರಿಯೂರು-ಬಾಕಿದಾರರು**

ಈ ಮೂಲಕ ದೃಢೀಕರಿಸುವುದೇನೆಂದರೆ ಶ್ರೀ ಎಂ. ವಿ. ಚನ್ನಯ್ಯ ಬಿನ್ ವೀರಯ್ಯ (ಜಾತಿ) ಲಿಂಗಾಯತ್ (ಧರ್ಮ) ಹಿಂದು, (ವೃತ್ತಿ) ಸಕ್ಕರೆ ಕಾರ್ಖಾನೆ ನೌಕರರು (ವಾಸಸ್ಥಳ) ವಾಟರ್ ಟ್ಯಾಂಕ್ ರಸ್ತೆ, ಹಿರಿಯೂರು ಟೌನ್, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಇವರು, ಮಾರಾಟಾಧಿಕಾರಿ (ನಿ.441), ದಿ ಹಿರಿಯೂರು ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ., ಹಿರಿಯೂರು ಇವರು ನಡೆಸಿದ ಬಹಿರಂಗ ಹರಾಜಿನಲ್ಲಿ ಈ ಕೆಳಗೆ ತೋರಿಸಿದ ಸ್ಥಿರ ಸ್ವತ್ತುಗಳನ್ನು ಕೊಂಡಿದ್ದಾರೆ. ಸದರಿ ಸ್ಥಿರ ಸ್ವತ್ತುಗಳನ್ನು, ದಿ ಹಿರಿಯೂರು ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ., ಹಿರಿಯೂರು ಇವರಿಗೆ ಶ್ರೀಮತಿ ಎಂ. ವಿ. ಶಿವಮ್ಮ ತಂದೆ ಬಿ. ವೀರಯ್ಯ (ಜಾತಿ) ಲಿಂಗಾಯತ್, (ಧರ್ಮ) ಹಿಂದು, ವ್ಯಾಪಾರಿಗಳು (ವೃತ್ತಿ) ವಾಸಸ್ಥಳ ಸೂರ್ಯ ಹೊಟೇಲ್ ಮುಂಭಾಗ, ಹಿರಿಯೂರು ಟೌನ್, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಇವರಿಂದ ಬರಬೇಕಾದ ಬಾಕಿ ಮೊತ್ತಕ್ಕೆ, ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಇವರ ನ್ಯಾಯಾಲಯದಿಂದ ಡಿಕ್ರಿ/ಅವಾರ್ಡ್/ ತೀರ್ಪು/ ಆದೇಶ ಸಂಖ್ಯೆ 120/2002-03 ದಿನಾಂಕ: 17.9.2002 ರ ರೀತ್ಯಾ ಅಮಲ್ಜಾರಿ ಕ್ರಮದಲ್ಲಿ ಹರಾಜು ಮಾಡಲಾಗಿ, ಕೊಂಡ ಮೊತ್ತ ರೂ. 85,000=00 ಗಳು ಸಂಪೂರ್ಣವಾಗಿ ಪಾವತಿಯಾಗಿದ್ದು, ನಾನು ದಿನಾಂಕ: 16.8.2004 ರಂದು ಸದರಿ ಹರಾಜನ್ನು (ಮಾರಾಟವನ್ನು) ಖಾಯಂಗೊಳಿಸಿರುತ್ತೇನೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ.

**ಸ್ಥಿರ ಸ್ವತ್ತುಗಳ ಷೆಡ್ಯೂಲ್**

| | | |
|---|---|---|
| **ನೋಂದಣಿ ಜಿಲ್ಲೆ** | : | ಚಿತ್ರದುರ್ಗ |
| **ನೋಂದಣಿ ಉಪ ಜಿಲ್ಲೆ** | : | ಹಿರಿಯೂರು |
| **ತಾಲ್ಲೂಕು** | : | ಹಿರಿಯೂರು |
| **ಗ್ರಾಮ** | : | ಹಿರಿಯೂರು ಟೌನ್ |

**ಸ್ವತ್ತುಗಳ ವಿವರ**

ಶ್ರೀಮತಿ ಎಂ. ವಿ. ಶಿವಮ್ಮ ತಂದೆ ಬಿ. ವೀರಯ್ಯ ಇವರ ಹೆಸರಿನಲ್ಲಿರುವ ಕಡಪಾ ಕಲ್ಲಿನ ಮನೆ, ಇದಕ್ಕೆ ಚಕ್ಕುಬಂದಿ:

| | | |
|---|---|---|
| **ಪೂರ್ವಕ್ಕೆ** | : | ಸೈಟ್ ನಂ. 25 |
| **ಪಶ್ಚಿಮಕ್ಕೆ** | : | ಎಂ. ವಿ. ಚನ್ನಯ್ಯನವರ ಮನೆ |
| **ಉತ್ತರಕ್ಕೆ** | : | ಮಾರಕ್ಕನವರ ಜಾಗ |
| **ದಕ್ಷಿಣಕ್ಕೆ** | : | 20 ಅಡಿ ಅಗಲದ ರಸ್ತೆ |

ಮುನಿಸಿಪಲ್ ಖಾತೆ ನಂ. 441, ಅಸೆಸ್‌ಮೆಂಟ್ ನಂ. 441/1374

ಹೆಸರು: ವಾಟರ್ ಟ್ಯಾಂಕ್ ರಸ್ತೆ, ಹಿರಿಯೂರು

ಅಂದಾಜು ವಿಸ್ತೀರ್ಣ: 20x20 ಅಡಿ

ಅಸೆಸ್‌ಮೆಂಟ್ ರೂ. 94,000.00

ಮಾರಾಟದ ಬೆಲೆ (ಪ್ರತಿ ಲಾಟ್‌ಗೆ): ಒಟ್ಟು ರೂ.85000/- (ಎಂಭತ್ತೈದು ಸಾವಿರ ರೂಪಾಯಿಗಳು ಮಾತ್ರ)

ಹರಾಜು ದಿನಾಂಕ: 24.6.2004

ನನ್ನ ಸಹಿ ಮತ್ತು ಮುದ್ರೆಯೊಂದಿಗೆ ದಿನಾಂಕ: 16.8.2004 ರಲ್ಲಿ ನೀಡಲ್ಪಟ್ಟಿದೆ.

ಸ್ಥಳ: ಚಿತ್ರದುರ್ಗ, ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ದಿನಾಂಕ: 16.8.2004 ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ.

## ಫಾರಂ ನಂಬರು 11
## (38ನೇಯ ರೂಲಿನ (7)ನೇಯ ಕಾಲಂ)
## ಸ್ಥಿರ ಸ್ವತ್ತುಗಳನ್ನು ಕೊಂಡದ್ದಕ್ಕೆ ಪ್ರಕಟಣೆ

ಚಿತ್ರದುರ್ಗ ಜಿಲ್ಲಾ, ಹಿರಿಯೂರು ತಾಲ್ಲೂಕು, ಹಿರಿಯೂರು ಟೌನ್ ವಾಟರ್‌ಟ್ಯಾಂಕ್ ರಸ್ತೆಯಲ್ಲಿರುವ ಶ್ರೀ ಎಂ. ವಿ. ಚನ್ನಯ್ಯ ಬಿನ್ ವೀರಯ್ಯ ಇವರು ಈ ಕೆಳಗೆ ತೋರಿಸಿದ ಸ್ಥಿರ ಸ್ವತ್ತುಗಳನ್ನು ಬಹಿರಂಗವಾಗಿ ಹರಾಜಿನಲ್ಲಿ 2004ನೇ ಇಸವಿ ಜೂನ್ ತಿಂಗಳ 24ನೇ ತಾರೀಖಿನಲ್ಲಿ ಕ್ರಯಕ್ಕೆ ಪಡೆದುಕೊಂಡಿದ್ದಾಗಿಯೂ ಮತ್ತು ದರಖಾಸ್ತು ಹಣ ರೂ. 85,000=00 ಗಳನ್ನು ಸಂಪೂರ್ಣವಾಗಿ ಪಾವತಿ ಮಾಡಿದ್ದಾರಾಗಿಯೂ ಈ ಮೂಲಕ ಎಲ್ಲಾ ಜನರಿಗೆ ಬಹಿರಂಗವಾಗಿ ತಿಳಿಸೋಣವಾಗುತ್ತದೆ. ಆದ ಪ್ರಯುಕ್ತ ಸದರಿ ಸ್ಥಿರಸ್ವತ್ತುಗಳಲ್ಲಿರುವ ಬಾಕಿದಾರನ ಎಲ್ಲಾ ಹಕ್ಕು-ವ-ಪ್ರಯೋಜನಗಳಿಗೆ ಸದರಿ ಶ್ರೀ ಎಂ. ವಿ. ಚನ್ನಯ್ಯ ಬಿನ್ ವೀರಯ್ಯರವರು ಉತ್ತರಾಧಿಕಾರರಾಗಿದ್ದಾರೆ ಎಂಬುದಾಗಿ ಈ ಮೂಲಕ ದೃಢಪಡಿಸೋಣವಾಗುತ್ತಿದೆ.

| ಗ್ರಾಮ ಮತ್ತು ತಾಲ್ಲೂಕು | ಸ್ಥಿರಸ್ವತ್ತುಗಳು ವಿವರ ತರಹೆ | ನಂ | ಪೋಡು ನಂ. | ಖಾತೆದಾರನ ಹೆಸರು | ಅಂದಾಜು ವಿಸ್ತೀರ್ಣ | ಷರಾ |
|---|---|---|---|---|---|---|
| 1 | 2 | 3 | 4 | 5 | 6 | 7 |
| ಹಿರಿಯೂರು ಟೌನ್ ಹಿರಿಯೂರು ತಾ. | ಕಡಪಾ ಕಲ್ಲಿನ ಮನೆ | ವಾಟರ್ ಟ್ಯಾಂಕ್ ರಸ್ತೆ, ಹಿರಿಯೂರು ಖಾತೆ ನಂ. 441 | ಅಸೆಸ್‌ಮೆಂಟ್ ನಂ.441/1374 | ಶ್ರೀಮತಿ ಎಂ. ವಿ. ಶಿವಮ್ಮ ತಂದೆ ಬಿ. ವೀರಯ್ಯ | 20 x 20 ಅಡಿ | |

ಸ್ಥಳ: ಚಿತ್ರದುರ್ಗ,
ದಿನಾಂಕ: 16.8.2004
ಪಿ.ಆರ್. 1213

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ.

## ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ
## ನಮೂನೆ-10

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ, 1959ರ ಅಡಿಯಲ್ಲಿ ರೂಪಿಸಲಾಗಿರುವ ನಿಯಮಗಳನ್ವಯ 38ನೇ ರೂಲಿನ 7ನೇಯ ಕಾಲಂ ಪ್ರಕಾರ ನೀಡಿರುವ 'ಸೇಲ್ ಸರ್ಟಿಫಿಕೇಟ್'

**ಹೆಸರು:** ಶ್ರೀ ಬಿ. ಟಿ. ಜಯರಾಮಪ್ಪ
ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ.

**ಅಮಲ್ಜಾರಿ ಅರ್ಜಿಸಂಖ್ಯೆ: 268/99-2000**

**ಪ್ರಧಾನ ವ್ಯವಸ್ಥಾಪಕರು, ದಿ ಹಿರಿಯೂರು ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ., ಹಿರಿಯೂರು - ಡಿಕ್ರಿದಾರರು**

**ವಿರುದ್ಧ**

**ಶ್ರೀಮತಿ ವಿ. ಸುನಂದಮ್ಮ ಕೋಂ ಎನ್. ವಿರೂಪಾಕ್ಷ, ಬೃಂದಾವನ್ ಪ್ರಿಂಟರ್ಸ್, ಹಿರಿಯೂರು - ಬಾಕಿದಾರರು**

ಈ ಮೂಲಕ ದೃಢೀಕರಿಸುವುದೇನೆಂದರೆ ಶ್ರೀ ರಫೀಕ್ ಬಿನ್ ಮೊಹಮ್ಮದ್ ಖಾಸಿಂ ಸಾಹೇಬ್, (ಜಾತಿ) ಮುಸ್ಲಿಂ (ಧರ್ಮ) ಇಸ್ಲಾಂ, (ವೃತ್ತಿ) ಹಮಾಲಿ (ವಾಸಸ್ಥಳ) ಪ್ರಧಾನ ಅಂಚೆ ಕಛೇರಿ ಹಿಂಭಾಗ, ಹಿರಿಯೂರು ಟೌನ್, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಇವರು, ಮಾರಾಟಾಧಿಕಾರಿ (ನಿ.441), ದಿ ಹಿರಿಯೂರು ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ., ಹಿರಿಯೂರು ಇವರು ನಡೆಸಿದ ಬಹಿರಂಗ ಹರಾಜಿನಲ್ಲಿ ಈ ಕೆಳಗೆ ತೋರಿಸಿದ ಸ್ಥಿರ ಸ್ವತ್ತುಗಳನ್ನು ಕೊಂಡಿದ್ದಾರೆ. ಸದರಿ ಸ್ಥಿರ ಸ್ವತ್ತುಗಳನ್ನು, ದಿ ಹಿರಿಯೂರು ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ., ಹಿರಿಯೂರು ಇವರಿಗೆ ಶ್ರೀಮತಿ ವಿ. ಸುನಂದಮ್ಮ ಕೋಂ ವಿರೂಪಾಕ್ಷ (ಜಾತಿ) ಶೆಟ್ಟಿ ಬಲಿಜ, (ಧರ್ಮ) ಹಿಂದು, (ವೃತ್ತಿ) ಪ್ರಿಂಟರ್ಸ್, ವಾಸಸ್ಥಳ ಪ್ರಧಾನ ರಸ್ತೆ, ಹಿರಿಯೂರು ಟೌನ್, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಇವರಿಂದ ಬರಬೇಕಾದ ಬಾಕಿ ಮೊತ್ತಕ್ಕೆ, ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಇವರ ನ್ಯಾಯಾಲಯದಿಂದ ಡಿಕ್ರಿ/ ಅವಾರ್ಡ್/ತೀರ್ಪು ಆದೇಶ ಸಂಖ್ಯೆ: 1240/98-99 ದಿನಾಂಕ: 23.1.99ರ ರೀತ್ಯಾ ಅಮಲ್ಜಾರಿ ಕ್ರಮದಲ್ಲಿ ಹರಾಜು ಮಾಡಲಾಗಿ, ಕೊಂಡ ಮೊತ್ತ ರೂ. 31,000/-ಗಳು ಸಂಪೂರ್ಣವಾಗಿ ಪಾವತಿಯಾಗಿದ್ದು, ನಾನು ದಿನಾಂಕ: 16.8.2004 ರಂದು ಸದರಿ ಹರಾಜನ್ನು (ಮಾರಾಟವನ್ನು) ಖಾಯಂಗೊಳಿಸಿರುತ್ತೇನೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ.

## ಸ್ಥಿರ ಸ್ವತ್ತುಗಳ ಷೆಡ್ಯೂಲ್

| | | |
|---|---|---|
| **ನೋಂದಣಿ ಜಿಲ್ಲೆ** | : | ಚಿತ್ರದುರ್ಗ |
| **ನೋಂದಣಿ ಉಪ ಜಿಲ್ಲೆ** | : | ಹಿರಿಯೂರು |
| **ತಾಲ್ಲೂಕು** | : | ಹಿರಿಯೂರು |
| **ಗ್ರಾಮ** | : | ಹಿರಿಯೂರು ಟೌನ್ |

**ಸ್ವತ್ತುಗಳ ವಿವರ (ಸೆಕ್ಯೂರಿಟಿ)**

ಶ್ರೀ ಯು. ಆರ್. ಮೊಹಮ್ಮದ್ ಅಮೀರ್ ಸಾಬ್ ಬಿನ್ ಗಾರೆ ಅಬ್ದುಲ್ ರಜಾಕ್ ಸಾಬ್ ಇವರ ಹೆಸರಿನಲ್ಲಿರುವ ಗುಡಿಸಲು , ಇದಕ್ಕೆ ಚಕ್ಕುಬಂದಿ:

**ಪೂರ್ವಕ್ಕೆ** : ಸೈಟ್ ನಂ. 24ರಲ್ಲಿರುವ ಕಟ್ಟಡ
**ಪಶ್ಚಿಮಕ್ಕೆ** : ಸೈಟ್ ನಂ. 26
**ಉತ್ತರಕ್ಕೆ** : ಮುನಿಸಿಪಲ್ ಕನ್ಸರ್ವೆನ್ಸಿ
**ದಕ್ಷಿಣಕ್ಕೆ** : ಮುನಿಪಿಪಲ್ ರಸ್ತೆ.

ಮುನಿಸಿಪಲ್ ಖಾತೆ ನಂ. 171, ಅಸೆಸ್‌ಮೆಂಟ್ ನಂ. 1582/171
ಹೆಸರು: 'ಎ' ಡಿವಿಜನ್, ಹಿರಿಯೂರು
ಅಂದಾಜು ವಿಸ್ತೀರ್ಣ: 20 x 50 ಅಡಿ
ಅಸೆಸ್‌ಮೆಂಟ್ ರೂ. 54,000-00
ಮಾರಾಟದ ಬೆಲೆ (ಪ್ರತಿ ಲಾಟ್‌ಗೆ): ಒಟ್ಟು ರೂ.31,000/- (ಮೂವತ್ತೊಂದು ಸಾವಿರ ರೂಪಾಯಿಗಳು ಮಾತ್ರ)
ಹರಾಜು ದಿನಾಂಕ: 24.6.2004
ನನ್ನ ಸಹಿ ಮತ್ತು ಮುದ್ರೆಯೊಂದಿಗೆ ದಿನಾಂಕ: 16.8.2004 ರಲ್ಲಿ ನೀಡಲ್ಪಟ್ಟಿದೆ.

ಸ್ಥಳ: ಚಿತ್ರದುರ್ಗ,
ದಿನಾಂಕ: 16.8.2004

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ.

**ಫಾರಂ ನಂಬರು 11**
**(38ನೇಯ ರೂಲಿನ (7)ನೇಯ ಕಾಲಂ)**
**ಸ್ಥಿರ ಸ್ವತ್ತುಗಳನ್ನು ಕೊಂಡದ್ದಕ್ಕೆ ಪ್ರಕಟಣೆ**

ಚಿತ್ರದುರ್ಗ ಜಿಲ್ಲಾ, ಹಿರಿಯೂರು ತಾಲ್ಲೂಕು, ಹಿರಿಯೂರು ಟೌನ್ ಪ್ರಧಾನ ಅಂಚೆ ಕಛೇರಿ ಹಿಂಭಾಗದಲ್ಲಿರುವ ಶ್ರೀ ರಫೀಕ್ ಬಿನ್ ಮೊಹಮ್ಮದ್ ಖಾಸಿಂ ಸಾಬ್ ಇವರು ಈ ಕೆಳಗೆ ತೋರಿಸಿದ ಸ್ಥಿರ ಸ್ವತ್ತುಗಳನ್ನು ಬಹಿರಂಗವಾಗಿ ಹರಾಜಿನಲ್ಲಿ 2004ನೇ ಇಸವಿ ಜೂನ್ ತಿಂಗಳ 24ನೇ ತಾರೀಖಿನಲ್ಲಿ ಕ್ರಯಕ್ಕೆ ಪಡೆದುಕೊಂಡಿದ್ದಾಗಿಯೂ ಮತ್ತು ದರಖಾಸ್ತು ಹಣ ರೂ. 31,000/- ಗಳನ್ನು ಸಂಪೂರ್ಣವಾಗಿ ಪಾವತಿ ಮಾಡಿದ್ದಾರಾಗಿಯೂ ಈ ಮೂಲಕ ಎಲ್ಲಾ ಜನರಿಗೆ ಬಹಿರಂಗವಾಗಿ ತಿಳಿಸೋಣವಾಗುತ್ತದೆ. ಆದ ಪ್ರಯುಕ್ತ ಸದರಿ ಸ್ಥಿರಸ್ವತ್ತುಗಳಲ್ಲಿರುವ ಬಾಕಿದಾರನ ಎಲ್ಲಾ ಹಕ್ಕು-ವ-ಪ್ರಯೋಜನಗಳಿಗೆ ಸದರಿ ಶ್ರೀ ರಫೀಕ್ ಬಿನ್ ಮೊಹಮ್ಮದ್ ಖಾಸಿಂ ಸಾಬ್‌ರವರು ಉತ್ತರಾಧಿಕಾರರಾಗಿದ್ದಾರೆ ಎಂಬುದಾಗಿ ಈ ಮೂಲಕ ದೃಢಪಡಿಸೋಣವಾಗುತ್ತಿದೆ.

| ಗ್ರಾಮ ಮತ್ತು ತಾಲ್ಲೂಕು | ಸ್ಥಿರಸ್ವತ್ತುಗಳು ವಿವರ ತರಹೆ | ವಿವರ | | ಅಂದಾಜು ವಿಸ್ತೀರ್ಣ | ಷರಾ |
|---|---|---|---|---|---|
| | | ನಂ. ಹಾಗೂ ಪೋಡು ನಂ. | ಖಾತೆದಾರನ ಹೆಸರು | | |
| 1 | 2 | 3 | 4 | 5 | 6 |
| ಹಿರಿಯೂರು ಟೌನ್ ಹಿರಿಯೂರು | ಗುಡಿಸಲು | ಎ-ಡಿವಿಜನ್ ಖಾತೆ ನಂ. 171 ಅ.ನಂ.1582/171 | ಯು.ಆರ್. ಮೊಹಮ್ಮದ್ ಅಮೀರ್ ಸಾಬ್ ಬಿನ್ ಗಾರೆ ಅಬ್ದುಲ್ ರಜಾಕ್ ಸಾಬ್ | 20 x 20 ಅಡಿ | |

ಸ್ಥಳ: ಚಿತ್ರದುರ್ಗ,
ದಿನಾಂಕ: 16.8.2004
ಪಿ.ಆರ್. 1214

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ.

**IN THE COURT OF COMMISSIONER FOR WORKMEN'S COMPENSATION BIDAR.**
**No: LOB/WCA/Cr-36/2004**

**Applicants:**
1. Balappa S/o Maglappa
Age 45 years Occ: Labour,
R/o Village, Rajgira Dist
Bidar & Others

**V/s**

**Respondents:**
1. G. Rama Mohan Reddy
S/o G. Subharam Reddy Creative Builders,
Hyderabad
2. N. Narasimha Reddy
S/o Venkat Reddy Naradmath, Rangareddy Dist.

**PROCLAMATION**

Sri/Smt Balappa F/o Srikanth R/o Rajgira Dist Bidar have/ has filed application in this Court claiming compensation stating that Late Srikanth Was working as Labour Under the Respondent No. I & II he met with an accident arising out of and during the course of employment as a result he died on 4.9.2003

Werefore, it is hereby notified for the information of these concerned that other dependents if any may file their claim application and objections within 30 days from the date of publication of this proclamation, if no applications or objections are received within the specified date the court will proceeded further in the matter.

Commissioner for workmen's
Compensation, Bidar.

PR-1203